| 1 | 2 | 3 | 4 | 5 | 6 |
|---|---|---|---|---|---|
| 17. | MALAKARISIDDA BIRADAR<br>At Post Basanal Indi Tq<br>Bijapur - 586117 | ( 131) | 12/08/73 | 2A<br>S.S.L.C.<br>Diploma (M.E.) | |
| 18. | GEETA SUBHASH<br>C/o Y Gnaneshwar Vijaya Nivas<br>HNo.1-867/22G-1A NR Kothari<br>Bhavan Jewargi Road Gulbarga-585102 | ( 64) | 08/02/73 | 3B<br>S.S.L.C.<br>Dip.Elec & Tele | |
| 19. | DEVARAJA T<br>#22 2-Main Attiguppe<br>M M Compound Vijayanagar<br>2nd Stage Bangalore - 560040 | ( 52) | 22/06/74 | 2A<br>S.S.L.C.<br>Dip.Electrical | |
| 20. | SAMPATH KUMARAN R<br>No.15 Janatha Colony<br>Bannerghatta Post Bangalore-560083 | ( 234) | 30/05/75 | 3A<br>S.S.L.C.<br>Diploma (M.E.) | |
| 21. | YASIN M INDIKAR<br>C/o GM Indikar<br>New Kumbargalli Jorapur Pet<br>Bijapur - 586101 | ( 355) | 23/09/73 | 2B<br>S.S.L.C.<br>Dip.Electrical | |
| 22. | SURESH TALAWAR<br>Kalakeri At Post Sindagi Tq<br>Bijapur Dist - 586118 | ( 317) | 18/04/74 | 1<br>S.S.L.C.<br>Dip.Electrical | |
| 23. | MURALIDHAR C<br>C/o Narayana P<br>#103 Maruthi Nagara Sahakaranagar PO<br>Bangalore - 560092 | ( 389) | 30/08/61 | SC<br>S.S.L.C.<br>Diploma (M.E.) | |
| 24. | MANJULA M T<br>No.75 A-Street I-Main<br>New Guddahalli Mysore Road<br>Bangalore - 560026 | ( 135) | 14/06/68 | 2A/WR<br>S.S.L.C.<br>Dip.Electrical | |
| 25. | PUSHPALATHA K<br>Kumpala Mithranagar<br>Someshwara Village Kotekar PO<br>Mangalore Dist - 574152 | ( 191) | 03/05/74 | 2A/WR<br>S.S.L.C.<br>Dip.Elec & Tele | |
| 26. | VENKATESHA M M<br>Mullahalli Velagalaburre Post<br>Kolar Tq And Dist - 563126 | ( 419) | 13/06/74 | SC<br>S.S.L.C.<br>Dip.Electrical | |
| 27. | RAMESHA A S<br>S/o A C Singaiah<br>Jamboor Village & Post<br>Nuggehally Hobli C R Patna Tq-573131 | ( 406) | 17/07/67 | SC<br>S.S.L.C.<br>Diploma (M.E.) | |
| 28. | MANJUNATH S ALALAGERI<br>C/o Vinayaka K S 5th Cross<br>Opp Yoganarasimha Printers Nituvalli<br>Extn Davanagere - 577004 | ( 384) | 06/03/69 | ST<br>S.S.L.C.<br>Diploma (M.E.) | |
| 29. | TANGADI SABU SANGAPPA<br>Anand Nagar Mudhol Post Tq<br>Bagalkot Dist - 587313 | ( 320) | 01/06/58 | XMP/GM<br>S.S.L.C.<br>Dip.Electrical | |
| 30. | PUSHPA A<br>D/o Appanna 2-Main 3-Cross<br>Vijayanagar Extn Harihar PO<br>Davanagere Dt - 577602 | ( 190) | 20/07/73 | I /WR<br>S.S.L.C.<br>Dip.Electrical | |
| 31. | JAYANTHI M<br>Shankar Rao Chawl Goods Shed Road<br>Hubli Dharwad Dist - 580020 | ( 371) | 23/03/77 | SC/WR<br>S.S.L.C.<br>Dip.Elec & Tele | |
| 32. | UMAKANTHAMMA B<br>A-26 Bharath Nagar BEML Nagar<br>K G F Kolar Dist - 563115 | ( 416) | 10/07/72 | SC/WR<br>S.S.L.C.<br>Dip.Elec & Tele | |
| | **ADDITIONAL LIST** | | | | |
| 1. | DODDAHANUMAIAH D K<br>C/o Kariyappa<br>Dabbagunte C N Hally Tq<br>Tumkur Dist - 572218 | ( 56) | 18/07/67 | GM<br>S.S.L.C.<br>Dip.Electrical | |

| 1 | 2 | 3 | 4 | 5 | 6 |
|---|---|---|---|---|---|
| 2. | SHABBEER HUSSAIN<br>S/o Makhtumsab ILKAL<br>C/o Jamedhar Colony<br>At Koppal Koppal Dist - 583231 | ( 240) | 01/06/75 | GM<br>S.S.L.C.<br>Diploma (M.E.) | |
| 3. | SURESHA BABU R<br>#973 9/A-Main West Of Chord Rd<br>Mahalakshmipuram B'lore - 560086 | ( 318) | 12/04/74 | GM<br>S.S.L.C.<br>Diploma (M.E.) | |
| 4. | SHIVAKUMAR T<br>#751 24-Cross 4-Main<br>Vidyaranya Puram Mysore - 570008 | ( 257) | 06/01/69 | GM<br>S.S.L.C.<br>Diploma (M.E.) | |
| 5. | ANILKUMAR S HIREMATH<br>At Post Kanagala<br>Hukkeri Tq Belgaum Dist - 591225 | ( 9) | 12/12/72 | GM<br>S.S.L.C.<br>Diploma (M.E.) | |
| 6. | SWARNA GOWRI RAO B H<br>#3-25-2147 Kadri Temple Road<br>Kadri Mangalore - 575002 | ( 319) | 14/10/72 | GM/WR<br>S.S.L.C.<br>Dip.Elec & Tele | |
| 7. | DHAKSHANI<br>C/o Padmavathi Misse<br>#1-3-149 Main Road Bidar - 585401 | ( 53) | 01/07/73 | GM/WR<br>S.S.L.C.<br>Dip.Elec & Tele | |
| 8. | LALITA YAMANAPPA KARIBHAVI<br>Shetty Street Near Hulgamma<br>Temple Surpur Gulbarga - 585224 | ( 114) | 18/12/75 | GM/WR<br>S.S.L.C.<br>Dip.Elec & Tele | |
| 9. | PUTTAMADAIAH M<br>Water Tank Half Road Behind<br>Dharmaraja Arya Work Shop<br>Kanakapura Bangalore<br>Rural Dt - 562117 | ( 399) | 08/10/68 | SC<br>S.S.L.C.<br>Dip.Electrical | |
| 10. | MARIYAPPA K<br>C/o NM Bakkappa No.1042 Near<br>Standard English School<br>Opp Thammanna Bldg TD Halli<br>Blore - 560057 | ( 140) | 01/05/70 | I<br>S.S.L.C.<br>Diploma (M.E.) | |
| 11. | JAGANNATHA J R<br>S/o J M Rajegowda Javagal<br>Arasikere Tq Hassan Dist - 573125 | ( 85) | 10/05/72 | 2A<br>S.S.L.C.<br>Diploma (M.E.) | |
| 12. | ZAMEER PASHA M K<br>No.572 30 B Cross<br>Tilaknagar Jayanagar<br>4th Block Bangalore - 560041 | ( 359) | 15/05/67 | 2B<br>S.S.L.C.<br>Dip.Electrical | |
| 13. | KRISHNAIAH N<br>S/o Narasimhaiah B N<br>Narasappa Colony Ammasandra At<br>Post Tumkur Dist - 572211 | ( 378) | 03/02/68 | SC<br>S.S.L.C.<br>Dip.Electrical | |
| 14. | MANJUNATHA A<br>Pothaganahally Post<br>YN Hosakote HO Pavagada Tq<br>Tumkur Dist - 572141 | ( 385) | 10/05/66 | ST<br>S.S.L.C.<br>Diploma (M.E.) | |
| 15. | JAYA<br>Kullarumegina House<br>Kuthethur Village Bajav Post<br>Mangalore - 574149 | ( 87) | 07/08/74 | 2A/WR<br>S.S.L.C.<br>Dip.Elec & Tele | |
| 16. | RAKHEE NAIK K N<br>W/o Rajesh R C No 172<br>3rd Crs Venkata Reddy Main Road<br>(Near Marappa Fire Wood Depot)<br>Dayananda Nagara Jayanagar I-Blk<br>Bangalore - 560011. | ( 402) | 15/05/72 | SC/WR<br>S.S.L.C.<br>Dip.Elec & Tele | |

Note: The Selection of all the above candidates is subject to Final judgement of the Hon'ble Supreme Court of India in W.A (Civil) No:232/99 relating to women reservation.

**B.A. HARISH GOWDA**
Secretary
Karnataka Public Service Commission.

P.R. 722

## ಕರ್ನಾಟಕ ಅರಣ್ಯ ಇಲಾಖೆ

## ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ಐಟಿಪಿಎಲ್ ಎದುರು, ವೈಟ್‌ಫೀಲ್ಡ್ ಮುಖ್ಯ ರಸ್ತೆ, ಬೆಂಗಳೂರು-48

## ಟೆಂಡರ್ ಪ್ರಕಟಣೆ

**ಸಂಖ್ಯೆ: ಎಫ್‌ಟಿಎಟಿಐ:ಕನಿ:1:2003-2004, ದಿನಾಂಕ: 6ನೇ ನವೆಂಬರ್ 2003**

ಬೆಂಗಳೂರಿನ ನಗರ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಮೇಲ್ಕಂಡ ಅಧಿಕಾರಿಗಳ ಕಛೇರಿ ಆವರಣದಲ್ಲಿ ಶೆಡ್ಯೂಲ್‌ನಲ್ಲಿ ತೋರಿಸಿರುವ ಕಟ್ಟಡಗಳ ನಿರ್ಮಾಣ ಮಾಡಲು ಅರಣ್ಯ ಇಲಾಖೆಯಲ್ಲಿ 2003-04ನೇ ಸಾಲಿನಲ್ಲಿ ಗುತ್ತಿಗೆದಾರರಾಗಿ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಿಂದ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತದ 2001-02ನೇ ಸಾಲಿನ ಮಂಜೂರಾದ ದರದ ಮೇಲೆ ಶೇಕಡಾವಾರು ದರಗಳಲ್ಲಿ, ನಮೂದಾದ ಫಾರಂನಲ್ಲಿ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಪ್ರತಿ ಕೆಲಸಕ್ಕೆ ಪ್ರತ್ಯೇಕವಾಗಿ ದಿನಾಂಕ: 10.12.2003 ರಂದು 4.00 P.M. ವರೆಗೆ ಆಹ್ವಾನಿಸಲಾಗಿದೆ. ಒಂದು ವೇಳೆ ದಿನಾಂಕ: 10.12.2003 ರಂದು ಯಾವುದೇ ಟೆಂಡರ್ ಬಾರದೇ ಇದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ತಿಳಿದು 15.12.2003 ದಿನಾಂಕದಂದು 4.00 P.M. ವರೆಗೆ ಟೆಂಡರ್ ಸಲ್ಲಿಸಬಹುದಾಗಿರುತ್ತದೆ. ಮೇಲ್ಕಂಡ ದಿನಾಂಕಗಳಂದು ಸರ್ಕಾರಿ ರಜೆಯಾಗಿದ್ದ ಪಕ್ಷದಲ್ಲಿ ಅದರ ನಂತರದ ಕೆಲಸದ ದಿನಗಳಂದು ಟೆಂಡರ್ ನೀಡಬಹುದಾಗಿರುತ್ತದೆ. ಟೆಂಡರ್ ಫಾರಂಗೆ ಅರ್ಜಿ ಸಲ್ಲಿಸುವಾಗ ಅರ್ಜಿದಾರರು ಟೆಂಡರ್ ಶುಲ್ಕ ಮತ್ತು ಟೆಂಡರ್ ನಿಬಂಧನೆಗಳಲ್ಲಿ ಕಾಣಿಸಿರುವ ಅರ್ಹತೆಯ ಬಗ್ಗೆ ಅಗತ್ಯ ದಾಖಲಾತಿಗಳನ್ನು ಸಲ್ಲಿಸತಕ್ಕದ್ದು ಟೆಂಡರ್ ಶುಲ್ಕವನ್ನು ಯಾವುದೇ ಕಾರಣಕ್ಕೆ ಹಿಂದಿರುಗಿಸುವುದಿಲ್ಲ.

1. ಖಾಲಿ ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸುವ ದಿನಾಂಕ: 1,2, 3.12.2003 ಮಧ್ಯಾಹ್ನ 4.00 P.M. ವರೆಗೆ
2. ಅರ್ಜಿ ಸಲ್ಲಿಸಿರುವ ಅರ್ಹ ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ: 5,6.12.2003 ರವರೆಗೆ ಕಛೇರಿ ವೇಳೆಯಲ್ಲಿ
3. ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು (ದ್ವಿಪ್ರತಿಯಲ್ಲಿ) ಸ್ವೀಕರಿಸುವ ದಿನಾಂಕ: 10.12.2003ರ 4.00 P.M. ವರೆಗೆ
4. ಟೆಂಡರ್ ತೆರೆಯುವ ದಿನಾಂಕ: 10.12.2003ರ 4.30 P.M. ಗೆ

**ಷೆಡ್ಯೂಲ್**

| ಕ್ರ. ಸಂ. | ಕೆಲಸ ಮಾಡಬೇಕಾದ ಸ್ಥಳದ ವಿವರ | ಕಾಮಗಾರಿಗಳ ವಿವರ | ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ | ನೀಡಬೇಕಾದ ಇ.ಎಂ.ಡಿ. ರೂ. ಲಕ್ಷಗಳಲ್ಲಿ | ಕಾಮಗಾರಿಗಳನ್ನು ಪೂರ್ಣಗೊಳಿಸ ಬೇಕಾದ ಸಮಯ | ಷರಾ |
|---|---|---|---|---|---|---|
| 1 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ ಐಟಿಪಿಎಲ್ ಎದುರು, ವೈಟ್‌ಫೀಲ್ಡ್ ಮುಖ್ಯ ರಸ್ತೆ, ಬೆಂಗಳೂರು-48. | ಸಿಬ್ಬಂದಿ ನೌಕರರ ವಸತಿ ಗೃಹ ನಿರ್ಮಾಣ (twin) | 5.80 | 0.145 | ಕರಾರು ಮಾಡಿಕೊಂಡ ದಿನಾಂಕದಿಂದ 6 ತಿಂಗಳು | |
| 2 | -do- | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಚೇರಿ ಕಟ್ಟಡ ನಿರ್ಮಾಣ | 13.40 | 0.335 | -do- | |
| 3 | -do- | ಹಾಸ್ಟಲ್ ಕಟ್ಟಡ (kitchen block) | 15.70 | 0.39000 | -do- | |

ವಿವರವಾದ ಟೆಂಡರ್ ಷರತ್ತುಗಳ ವಿವರವನ್ನು ಈ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

**ನಿಬಂಧನೆಗಳು:**

1. ಟೆಂಡರುದಾರರು 2003-04ನೇ ಸಾಲಿನಲ್ಲಿ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2. ಟೆಂಡರು ಫಾರಂಗಳಿಗೆ ಅಂದಾಜು ವೆಚ್ಚದ ಶೇ.2.5 ಇ.ಎಂ.ಡಿ. ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ ಕಾಡುಗೋಡಿ, ಬೆಂಗಳೂರು-48 ಇವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.
3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ "ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ಕಾಡುಗೋಡಿ, ಬೆಂಗಳೂರು ಇವರಲ್ಲಿ ಕಟ್ಟಡಗಳನ್ನು ಕಟ್ಟುವ ಬಗ್ಗೆ" ಎಂದು ನಮೂದಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಇದೇ ಸಂಖ್ಯೆಯ ದಿನಾಂಕದ ಸಂಕ್ಷಿಪ್ತ ಟೆಂಡರು ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು ಟೆಂಡರ್ ಫಾರಂ ಬೆಲೆ ರೂ.500-00. (ತೆರಿಗೆಗಳು ಪ್ರತ್ಯೇಕ)

5. ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ಇತರೆ ವಿತರಣೆ ಮಾದರಿ ರೀತ್ಯವೇ ಮಾಡಬೇಕು ಹಾಗೂ ಅಂದಾಜು ಪಟ್ಟಿಗಳನ್ನು ಲೋಕೋಪಯೋಗಿ ಇಲಾಖೆಯ 2001-02ನೇ ಸಾಲಿನ ಮಂಜೂರಾದ ದರಪಟ್ಟಿಯ ಆಧಾರದ ಮೇಲೆ ತಯಾರು ಮಾಡಿ ಆಡಳಿತಾತ್ಮಕ ಮಂಜೂರಾತಿ ಪಡೆಯಲಾಗಿದೆ. ಇದರ ಮೇಲೆ ಟೆಂಡರ್‌ನಲ್ಲಿ ಶೇಕಡಾವಾರು ಕಡಿಮೆ ಅಥವಾ ಹೆಚ್ಚು ದರ ನಮೂದಿಸುವುದು.
6. ದಿನಾಂಕ: 10.12.2003 ರಂದು 4.00 P.M. ಗಂಟೆ ವೇಳೆಯವರೆಗೆ ಟೆಂಡರನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಡಬ್ಬದಲ್ಲಿ ಹಾಕಬೇಕು.
7. ದಿನಾಂಕ: 10.12.2003 ರಂದು 4.00 P.M. ಗಂಟೆಗೆ ಹಾಜರಿರುವ ಟೆಂಡರುದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆಗೆಯಲಾಗುವುದು.
8. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ಕಾಡುಗೋಡಿ, ಬೆಂಗಳೂರು-48 ರವರಿಗಿರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
9. ಪಿಡಬ್ಲ್ಯೂಡಿ ದರಗಳಿಲ್ಲದ ಕೆಲಸ / ವಸ್ತುಗಳಿಗೆ ಡಾಟಾ ಶೀಟ್ ತಯಾರಿಸಿ ಪಿ.ಡಬ್ಲ್ಯೂ.ಡಿ. ಅಧೀಕ್ಷಕ ಅಭಿಯಂತರರಿಂದ ಅಂಗೀಕರಿಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು.
10. ಯಶಸ್ವಿ ಟೆಂಡರ್‌ದಾರರು ಕೆಲಸದ ಸಂದೇಶ ಕೊಟ್ಟ 3 ದಿನಗಳೊಳಗೆ ಈ ಕಛೇರಿಯಲ್ಲಿ ರೂ.50.00 ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.
11. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
12. ಯಶಸ್ವಿ ಟೆಂಡರುದಾರರಿಂದ ಇಎಂಡಿ ಜೊತೆಯಲ್ಲಿ ಶೇಕಡಾ 5 ರಷ್ಟನ್ನು ಅವರ ಬಿಲ್ಲುಗಳಲ್ಲಿ ಭದ್ರಾತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ಅವರಿಗೆ ಒಪ್ಪಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಹಾಗೂ ಅಂತಿಮ ಬಿಲ್ ಪಾವತಿಯಾದ 6 ತಿಂಗಳ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.
13. ಪ್ರತಿ ಬಿಲ್‌ನಲ್ಲಿ ಶೇ.2 ರಷ್ಟನ್ನು ಆದಾಯ ಮತ್ತು 8 ರಷ್ಟನ್ನು ಮಾರಾಟ ತೆರಿಗೆಯಾಗಿ ಮತ್ತು ಆಗಿಂದಾಗ್ಗೆ ಬದಲಾಗುವ ಸರ್ಕಾರಿ ಆದೇಶದಂತೆ ಅನ್ವಯವಾಗುವಂತೆ ಎಲ್ಲಾ ತೆರಿಗೆಗಳನ್ನು ಕಟಾವು ಮಾಡಲಾಗುವುದು.
14. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ತರಬೇತಿ ಮತ್ತು ನಿಸರ್ಗ ಪ್ರವಾಸೋದ್ಯಮ, ಧಾರವಾಡ ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
15. ಕೆಲಸದ ಆದೇಶ ನೀಡಿದ ದಿನಾಂಕದಿಂದ 6 ತಿಂಗಳೊಳಗೆ ಕೆಲಸವನ್ನು ಪೂರೈಸತಕ್ಕದ್ದು.
16. ಇತರೆ ಇಲಾಖೆಗಳಿಂದ ಅಂದರೆ ಕೆಇಬಿ, ಒಳಚರಂಡಿ, ನಗರಪಾಲಿಕೆ ಇಲಾಖೆಯಿಂದ ಕಟ್ಟಡದ ಕಾರ್ಯದ ಸಲುವಾಗಿ ಬೇಕಾದ ಅನುಮತಿ ನೀವೇ ಪಡೆಯಬೇಕು.
17. ಟೆಂಡರುದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು ಮತ್ತು ಕಟ್ಟಡದ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಜೀವ ಮತ್ತು ಆಸ್ತಿ ನಷ್ಟ ಸಂಬಂಧಿಸಿದ್ದಲ್ಲಿ ನೀವೇ ಹೊಣೆಗಾರರಾಗಿರುತ್ತೀರಿ.
18. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದೆ ಎಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ / ವಲಯ ಅರಣ್ಯಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲು ಪಾವತಿಸಲಾಗುವುದು.
19. ಟೆಂಡರುದಾರರು 12 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.
20. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
21. ಸಾರ್ವತ್ರಿಕ ರಜೆ ದಿನಗಳಲ್ಲಿ ಕೆಲಸ ಮಾಡಬೇಕಾದರೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.
22. ಟೆಂಡರುದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.
23. ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ನೂತನ ಪದ್ಧತಿಯ ರೀತ್ಯಾ ಮಾಡಲಾಗುವುದು.
24. ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗದಿಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇ.1 ರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು / ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಲೇಬೇಕಾಗುತ್ತದೆ.
25. ಈ ಕೆಲಸವನ್ನು ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ನಷ್ಟ ಸಂಭವಿಸಿದ್ದಲ್ಲಿ ಪರಿಹಾರವಾಗಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದುಕೊಳ್ಳಲಾಗುವುದು.
26. ಟೆಂಡರುದಾರರು ನಿಗದಿತ ಅವಧಿಯಲ್ಲಿ ಕಾಮಗಾರಿಯನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾ ವತಿಯಿಂದ ಮಾಡಿಸಲು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂಪೂರ್ಣ ಹಕ್ಕಿರುತ್ತದೆ ಮತ್ತು ಈ ಸಂಬಂಧದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಕೆಲಸದ ಬಗ್ಗೆ ನೀಡಿದ ದೃಢೀಕರಣ ಪತ್ರವೆ ಅಂತಿಮವಾಗಿರುತ್ತದೆ.

27. ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
28. ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.
29. ಕೆಲಸದಲ್ಲಿ ಏನಾದರೂ ಬದಲಾವಣೆ / ಮಿತಿಗೊಳಿಸಿದ್ದಲ್ಲಿ ಟೆಂಡರುದಾರರು ಕ್ಲೇಂ ಮಾಡಬಹುದಾದ ಯಾವುದೇ ರೀತಿಯ ಪರಿಹಾರಗಳನ್ನು ನೀಡಲು ಇಲಾಖೆ ಬದ್ಧವಾಗಿರುವುದಿಲ್ಲ.
30. ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ನೀಡಿದ ಆದೇಶವೆ ಅಂತಿಮವಾಗಿದ್ದು ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ಧರಾಗಿರಬೇಕು.
31. ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕಳಪೆಯಾಗಿದ್ದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸಿದ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.
32. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಕಾಮಗಾರಿಯನ್ನು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದುಪಡಿಸುವುದಲ್ಲದೇ ಇಎಂಡಿ ಮತ್ತು ಎಸ್‌ಡಿ ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
33. ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ನೌಕರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದಲ್ಲಿ ಅದರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು. ಒಂದು ವೇಳೆ ಈ ವೆಚ್ಚವನ್ನು ಇಲಾಖೆ ಭರಿಸಿದ್ದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.
34. ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸುವ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ಟೆಂಡರುದಾರರೇ ತೆಗೆದುಕೊಳ್ಳುವುದು.
35. ಕೆಲಸ ಪ್ರಾರಂಭಿಸುವಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.
36. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
37. ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕವೇ ನೀಡಲಾಗುವುದು.
38. ಟೆಂಡರುದಾರರು ನಮೂದಿಸಿರುವ ದರವು ನಿಯಾಮಾವಳಿಗಳ ಪ್ರಕಾರ ಮಾರಾಟ ತೆರಿಗೆ ದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.
39. ಮೇಲೆ ಹೇಳಿದ ಟೆಂಡರು ನಿಯಮಗಳಿಗೆ ಒಪ್ಪದೆ ಇದ್ದ ಟೆಂಡರುದಾರರ ಟೆಂಡರನ್ನು ತಿರಸ್ಕರಿಸಲಾಗುವುದು.
40. ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ, ಹೊಸದರಪಟ್ಟಿಯ ಪ್ರಕಟಣೆ ಮುಂತಾದ್ದು ಅಥವಾ ಇನ್ನಾವುದೇ ಕಾರಣದಿಂದ (ಅವಧಿ ವಿಸ್ತರಣೆಯಿಂದಲೂ) ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.
41. ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇಎಂಡಿ ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ. ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.
42. ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ, ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.
43. ಪಿಡಬ್ಲ್ಯೂಡಿ ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.
44. ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.
45. ನಮೂದಿಸಿದ ದರಗಳಲ್ಲಿ ಸಾಮಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯುವುದು.
46. ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೆ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು, ತಿರಸ್ಕೃತ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.
47. ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇ.2ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.
48. ಟೆಂಡರುದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸ ಸೇರಿರುತ್ತದೆ ಎಂದು ತಿಳಿಯುವುದು.
49. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.
50. ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ನೋಂದಣಿ ಪ್ರತಿ, ಅನುಭವದ ಪ್ರತಿ ಹಾಗೂ ಕಾಮಗಾರಿಗಳಿಗೆ ಅಗತ್ಯವಾದ ಎಲ್ಲಾ ವಿಧವಾದ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಅರ್ಹತೆಯ ದಾಖಲಾತಿಗಳನ್ನು ದ್ವಿಪ್ರತಿಯಲ್ಲಿ ಅರ್ಜಿ ಸಲ್ಲಿಸುವ ಸಮಯದಲ್ಲಿ ದಾಸ್ತಾವೇಜುಗಳ ಶುಲ್ಕದೊಂದಿಗೆ ಸಲ್ಲಿಸುವುದು. ಅರ್ಹತಾ ಪತ್ರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಕಾರ್ಯನಿರ್ವಾಹಕ ಅಭಿಯಂತರ ಹುದ್ದೆಗೆ ಕಡಿಮೆ ಇರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆಯಬೇಕು.

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ತಾಂತ್ರಿಕ ಮತ್ತು ಆಡಳಿತ ತರಬೇತಿ ಸಂಸ್ಥೆ, ಬೆಂಗಳೂರು-48.

ಪಿ.ಆರ್. 704

**PUBLIC WORKS DEPARTMENT**
**OFFICE OF THE EXECUTIVE ENGINEER, PWD UDUPI DIVISION, UDUPI**
**TENDER NOTIFICATION**
**No. GNL/TND/UDN/2003-04/JE, Dated: 23rd October 2003**

Separate sealed item rate tenders for the works noted below as per Karnataka Transparency in Public Procurement Ordinance 2000 and Act 2000 in prescribed form in duplicate are invited from the Class-1 contractors registered in KPWD in two cover system. Two cover bid system of tendering Consists of "Technical Bid" and "Financial Bid". Bids will be received in two parts in two different sealed covers marked as "Technical Bid" and "Financial Bid". These two covers shall be sealed and kept in another sealed cover duly superscribing Name of Work and shall be addressed to the undersigned with name and full postal address of the bidder. Completed bid will be received in the office of the Executive Engineer, P.W.D. Udupi Division, Udupi up to 4 PM on 17/11/2003 subject to the conditions laid down in Form No: PWG-65 & 66 of K.P.W.D. Code vol.-II. The technical bid will be opened on the date noted below. Financial Bid of only those bidders who qualify in the Technical Bid shall be opened. If any one of the dates noted below happens to be a general holiday, the next working day will hold good.

| Sl. No. | Name of Work | Amount put to Tender | EMD (in Rs.) | Cost of Tender forms (in Rs.) Non refundable | Nature of work | Time for completion of work (excluding Monsoon) |
|---|---|---|---|---|---|---|
| 1 | Improvements to Road from Shankarpura - Shirva - Belman - Sacharipete in Udupi Taluk. | Rs.1,41, 78,834.00 | Rs.1,42,000 .00 | Rs.10,000.00 + Taxes | BM / SDBC | 2 Months |

**CONDITIONS**

2) Pre qualification requirements are detailed in the Technical Bid. Each tenderer shall use following machinery and submit evidence of ownership / possession as detailed below.

| | Machinery | Numbers | Evidence of ownership / possession to be furnished |
|---|---|---|---|
| i) | Hot Mix Plant of "Above 40 to 60 T.P.H." capacity (as per MOST specification) | 1 | Purchase invoice / Sale deed with a copy of Purchase invoice |
| ii) | Paver Finisher | 1 | - Do - |
| iii) | Mechanical sprayer | 1 | - Do - |
| iv) | Vibrator Road Roller | 1 | - Do - |
| v) | Static Road Roller | 1 | - Do - |
| vi) | Tipper | 4 | Registration Certificate from R.T.O. |

1) Erraction of Hot Mix plant should be within a distance 50 Kms. from the work spot. Proof of location with sketch shall be produced along with application.
2) The contractors interested in bidding for the work may submit an application to the undersigned along with cost of tender documents to be paid in cash or in the form of DD drawn in favour of the Executive Engineer, PWD, Udupi Division, Udupi payable at Udupi. Along with application, the applicants should submit the proof of registration, latest Income tax & Sale tax clearance certificate obtained from the concerned Department while submitting the application for tender schedules, otherwise the application will not be considered.
3) The Contractors should furnish a certificate from the competent authority for having executed similar type of single work within One Year / Financial Year to an extent of 30% of the amount of above work.
4) For proof of Financial Capacity "Line of Credit" / solvency from any Scheduled Bank shall invariably by produced in the prescribed proforma of Technical Bid for an amount equal to 50% of the amount put to tender for works.
5) The EMD in the form of FDR / DD / Bankers Cheque / Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed to the Technical Bid. Otherwise tender will be rejected. Regarding the validity of the EMD, tender condition etc., PWG 66 shall be referred to and is binding on the tenderer.
6) The Schedule of dates is as follows:
   a. Last date for receipt of application for issue of Schedules : 07-11-2003
   b. Issue of Blank Tender Schedules : 12-11-2003 to 13-11-2003
   c. Last date for submission of Technical & Financial Bid : 17-11-2003 up to 4.00 PM.
   d. Opening of Technical Bid : Same day if possible/Nextday

7) All documents enclosed in support of Technical Bids shall be attested by the District level officer. The original documents should be produced for verification on the day of opening of Technical Bid or otherwise tenders will be disqualified.
8) Financial Bids of the technically qualified tenderers will be opened in the office of the Executive Engineer, PWD Udupi Division, Udupi on the date and time to be intimated in due course.
9) Only relevant certificates and details shall be furnished along with the Technical Bid. Details of Company / agencies / Firms profiles need not be enclosed.
10) The competent authority reserves the right to reject any or all tenders without assigning any reason there off.
11) Contractor has to make his own arrangements to procure the materials required such as bitumen and same should be got tested before using for the work and should conform to ISS standards, Contractors should note this point before submitting tender for the work.

**N.T. RAJGOPAL**
Executive Engineer, PWD Udupi Division, Udupi

P.R - 694

**ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ,**

**ನಂ.9:1, ಶ್ರೀ ಪ್ರಶಾಂತ್ ಕಾಂಪ್ಲೆಕ್ಸ್, ಪಿ. ಕಾಳಿಂಗರಾವ್ ರಸ್ತೆ, ಬೆಂಗಳೂರು-560027**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಉತಇ:ತರಬೇತಿ:ಆಡಳಿತ-11:ವಿವ-2:2003-04, ದಿನಾಂಕ: 3ನೇ ನವೆಂಬರ್ 2003**

**ವಿಷಯ:** ಹಳೆಯ ಮುಖ್ಯ ಉತ್ತರ ಪುಸ್ತಕಗಳು ಹಾಗೂ ಹೆಚ್ಚುವರಿ ಹಾಳೆಗಳನ್ನು ವಿಲೇವಾರಿ ಮಾಡಲು ಟೆಂಡರ್ ಪ್ರಕಟಣೆ ಬಗ್ಗೆ.

ಈ ಕಛೇರಿಯಲ್ಲಿ ಅವಧಿ ಮುಗಿಸಿರುವ ಹಳೆಯ ಕಡತಗಳು, ಹಳೆಯ ಮುಖ್ಯ ಉತ್ತರ ಪತ್ರಿಕೆಗಳು ಮತ್ತು ಹೆಚ್ಚುವರಿ ಹಾಳೆಗಳನ್ನು ಖರೀದಿಸುವ ಸಲುವಾಗಿ ಈ ಕೆಳಕಂಡ ಷರತ್ತಿನಂತೆ ಉದ್ದೇಶಿತ ವ್ಯಾಪಾರ ಸಂಸ್ಥೆಗಳಿಂದ **"ಮೊಹರು ಹಾಕಿದ ಟೆಂಡರ್"** ಕರೆಯಲಾಗಿದೆ.

1. ಮೊಹರು ಹಾಕಿದ ಟೆಂಡರ್ ದರಪಟ್ಟಿಯ ಲಕೋಟೆಯನ್ನು ಸಹಾಯಕ ನಿರ್ದೇಶಕರು (ಆಡಳಿತ) ಉದ್ಯೋಗ ಮತ್ತು ತರಬೇತಿ ಇಲಾಖೆ, ನಂ.9:1, ಪ್ರಶಾಂತ್ ಕಾಂಪ್ಲೆಕ್ಸ್, ಪಿ.ಕಾಳಿಂಗ ರಾವ್ ರಸ್ತೆ, ಬೆಂಗಳೂರು-560027 ಈ ವಿಳಾಸಕ್ಕೆ ಕಳುಹಿಸಬೇಕು. ಮೊಹರು ಮಾಡಿದ ಟೆಂಡರ್‌ಗಳನ್ನು ದಿನಾಂಕ: 27.11.2003ರ ಮಧ್ಯಾಹ್ನ 4 ಗಂಟೆಯ ಒಳಗೆ ಸಲ್ಲಿಸಲು ಸೂಚಿಸಿದೆ.
2. ಲಕೋಟೆಯ ಮೇಲೆ ಪತ್ರದ ಸಂಖ್ಯೆ: ಉತಇ:ತರಬೇತಿ:ಆಡಳಿತ-11:ವಿವ-02:2003-04, **"ಹಳೆಯ ಮುಖ್ಯ ಉತ್ತರ ಪತ್ರಿಕೆಗಳನ್ನು ಖರೀದಿಸಲು ಟೆಂಡರ್ ದರಪಟ್ಟಿ"** ಎಂದು ಬರೆದಿರಬೇಕು.
3. ಹೆಚ್ಚಿನ ಬೆಲೆಯನ್ನು ನಮೂದಿಸಿರುವ ಟೆಂಡರ್ ದರಪಟ್ಟಿಯನ್ನು ಒಪ್ಪಲಾಗುವುದು.
4. ಟೆಂಡರ್ ದರಪಟ್ಟಿಯನ್ನು ಒಪ್ಪುವುದು ಅಥವಾ ತಿರಸ್ಕರಿಸುವುದರ ಬಗ್ಗೆ, ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇವರದೇ ಅಂತಿಮ ನಿರ್ಣಯವಾಗಿರುತ್ತದೆ.
5. ಟೆಂಡರ್ ದರಪಟ್ಟಿಯನ್ನು ಸ್ವೀಕರಿಸಲು ದಿನಾಂಕ: 27.11.2003 ಕೊನೆಯ ದಿನವಾಗಿರುತ್ತದೆ. ಅನಂತರ ಬಂದ ಟೆಂಡರ್ ದರಪಟ್ಟಿಯನ್ನು ಪರಿಗಣಿಸಲಾಗುವುದಿಲ್ಲ.
6. ಪ್ರತಿಯೊಬ್ಬ ದರಖಾಸ್ತುದಾರರು ತಮ್ಮ ಟೆಂಡರ್ ಜೊತೆ ದರಪಟ್ಟಿಯ ಮುಂಗಡ ಠೇವಣಿ ಹಣವಾಗಿ ರೂ.1000-00 ಬೇಡಿಕೆ ಹುಂಡಿ (ಡಿ.ಡಿ.) ಯನ್ನು ಆಡಳಿತ ಸಹಾಯಕರು ನಿರ್ದೇಶಕರ ಕಛೇರಿ, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು-27 ಇವರ ಪರವಾಗಿ ಕಳುಹಿಸಬೇಕು. ಬೇಡಿಕೆಯ ಹುಂಡಿಯನ್ನು ಕಳುಹಿಸದಿದ್ದವರ ಟೆಂಡರ್ ದರಪಟ್ಟಿಯನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ತಿರಸ್ಕೃತವಾದ ದರಖಾಸ್ತುದಾರರ ಮುಂಗಡ ಠೇವಣಿ ಹಣವನ್ನು ಅವರಿಗೆ ಹಿಂತಿರುಗಿಸಲಾಗುವುದು.
7. ಯಾರ ದರಪಟ್ಟಿಯನ್ನು ಒಪ್ಪಲಾಗಿದೆಯೋ ಅವರು ಸಾಮಗ್ರಿಗಳನ್ನು ತೆಗೆದುಕೊಂಡು ಹೋಗುವ ಮೊದಲು ಪೂರ್ಣ ಹಣವನ್ನು ನಗದಾಗಿ ಪಾವತಿ ಮಾಡಬೇಕು. ಇದರ ಜೊತೆಗೆ ಮಾರಾಟ ತೆರಿಗೆ, ಸರ್‌ಛಾರ್ಜ್ ತೆರಿಗೆ ಹಣವನ್ನು ಮಾರಾಟದ ವಿಕ್ರಯ ಧನವಾಗಿ ನಿಯಮಿತ ದರದಲ್ಲಿ ಪಾವತಿ ಮಾಡಬೇಕು. ಅನಂತರ ಅವರು ಕಳುಹಿಸಿರುವ ಬೇಡಿಕೆ ಹುಂಡಿಯನ್ನು ಅವರಿಗೆ ಹಿಂತಿರುಗಿಸಲಾಗುವುದು.
8. ವಿಲೇವಾರಿ ಮಾಡಲಾಗುವ ಹಳೆಯ ಮುಖ್ಯ ಉತ್ತರ ಪತ್ರಿಕೆಗಳು ಹಾಗೂ ಹೆಚ್ಚುವರಿ ಹಾಳೆಗಳು ಹಾಗೂ ಇತ್ಯಾದಿಗಳನ್ನು ಅವುಗಳು ಹೇಗಿವೆಯೋ ಹಾಗೆಯೇ ವಿಲೇವಾರಿ ಮಾಡಲಾಗುವುದು. ಟೆಂಡರ್‌ದಾರರು ಬೇಕಾದಲ್ಲಿ ಮೇಲಿನ ಹಳೆಯ ಪರೀಕ್ಷೆಗೆ ಉಪಯೋಗಿಸಲಾದ ಮುಖ್ಯ ಉತ್ತರ ಪತ್ರಿಕೆ ಹಾಗೂ ಇತ್ಯಾದಿಗಳನ್ನು ಕಛೇರಿಯ ವೇಳೆಯಲ್ಲಿ ಪರಿಶೀಲಿಸಬಹುದು.
9. ದರಪಟ್ಟಿಯಲ್ಲಿ ಪ್ರತಿ ನೂರು ಕೆ.ಜಿ.ಗೆ (100) ನಿರ್ದಿಷ್ಟ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ತಿಳಿಸಬೇಕು.
10. ಸಾಮಗ್ರಿಗಳನ್ನು ತೂಕ ಮಾಡಲು ತಮ್ಮ ಸ್ವಂತ ಪರಿಪೂರ್ಣ ತೂಕದ ಯಂತ್ರವನ್ನು ಮತ್ತು ತುಂಬಲು ಚೀಲಗಳನ್ನು ತಾವೇ ತರಬೇಕು. ತೂಕದ ಯಂತ್ರವನ್ನು ಪರಿಶೀಲಿಸಿ, ಸಾಮಗ್ರಿಗಳನ್ನು ಪ್ರಾಧಿಕಾರ ಪಡೆದ ಅಧಿಕಾರಗಳ ಸಮ್ಮುಖದಲ್ಲಿ ತೂಕ ಮಾಡಲಾಗುವುದು.
11. ಒಪ್ಪಲಾಗುವ ದರಖಾಸ್ತುದಾರರು ಸರಕುಗಳನ್ನು ಕೊಳ್ಳದೇ ಇದ್ದ ಪಕ್ಷದಲ್ಲಿ ಅವರು ಕಳುಹಿಸಿರುವ ರೂ.1000-00 ಗಳ ಮುಂಗಡ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಜಂಟೀ ನಿರ್ದೇಶಕರು ತರಬೇತಿ (ಆಡಳಿತ : ಸಮನ್ವಯ)
ಉದ್ಯೋಗ ಮತ್ತು ತರಬೇತಿ.

ಪಿ.ಆರ್. 705

## ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ
## ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು
## ಮರು ಹರಾಜು ಪ್ರಕಟಣೆ

**ಸಂಖ್ಯೆ: ಎ4-ಅಂಬಾಸಿಡರ್‌ಕಾರು-ವಾಹನಗಳು-ಹರಾಜು-2002-2003, ದಿನಾಂಕ: 31ನೇ ಅಕ್ಟೋಬರ್ 2003**

**ವಿಷಯ:** ಅಂಬಾಸಿಡರ್ ಕಾರು ಸಂಖ್ಯೆ. ಎಂ.ಇ.ಎ 3982 ಕಾರಿನ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ವಿಭಾಗಕ್ಕೆ ಸೇರಿದ ಸರ್ಕಾರಿ ವಾಹನ ಸಂಖ್ಯೆ:ಎಂ.ಇ.ಎ 3982ನ್ನು ಹೇಗಿದೆಯೋ ಹಾಗೆ ಎಂಬ ಆಧಾರದ ಮೇಲೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಸಮ್ಮುಖದಲ್ಲಿ ಈ ಕೆಳಗೆ ಸೂಚಿಸಿರುವ ಸ್ಥಳ ಮತ್ತು ದಿನಾಂಕದಂದು ಬೆಳಿಗ್ಗೆ 11.00 ಗಂಟೆಗೆ ಹರಾಜು ಮೂಲಕ ಮಾರಾಟ ಮಾಡಲಾಗುವುದು.

| ಕ್ರ. ಸಂ. | ವಾಹನದ ಸಂಖ್ಯೆ ಮತ್ತು ಹೆಸರು | ಹರಾಜು ದಿನಾಂಕ ಮತ್ತು ಸಮಯ | ಸ್ಥಳ |
|---|---|---|---|
| 1 | ಅಂಬಾಸಿಡರ್ ಕಾರು ಸಂಖ್ಯೆ: ಎಂ.ಇ.ಎ. 3982 | 24.11.2003 ಬೆಳಿಗ್ಗೆ 11.00 ಗಂಟೆಗೆ | ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 076 |

ಒಂದು ವೇಳೆ ಅಂದು ಮಾರಾಟವಾಗದೆ ಇದ್ದಪಕ್ಷದಲ್ಲಿ ದಿನಾಂಕ: 28.11.2003 ರಂದು ಇದೇ ಹರಾಜು ಪ್ರಕಟಣೆ ಆಧಾರದ ಮೇಲೆ ಅಂತಿಮವಾಗಿ ಹರಾಜು ಮೂಲಕ ಮಾರಾಟ ಮಾಡಲಾಗುವುದು.

### ಷರತ್ತುಗಳು

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ರೂ.5000.00 ಗಳ ನಗದನ್ನು ಇ.ಎಂ.ಡಿ. ಆಗಿ ಇಟ್ಟು ಭಾಗವಹಿಸಬಹುದು.
2. ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭವಾಗುವ ಮುನ್ನ ಕಛೇರಿಯ ವೇಳೆಯಲ್ಲಿ ವಾಹನಗಳನ್ನು ವೀಕ್ಷಿಸಿ ವಾಹನದ ಪರಿಸ್ಥಿತಿಯನ್ನು ಕುರಿತು ತಪಾಸಿಸಿಕೊಂಡು ಖಾತ್ರಿ ಮಾಡಿಕೊಳ್ಳುವುದು, ವಾಹನವು ಹೇಗಿದೆಯೋ ಹಾಗೆಯಿರುವ ಆಧಾರದ ಮೇಲೆ ಹರಾಜು ಮಾಡಲಾಗುವುದು.
3. ಈ ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ ನಾಲ್ಕನೇ ಒಂದು ಭಾಗ ಹಣವನ್ನು ಮತ್ತು ಪೂರ್ಣ ತೆರಿಗೆಯನ್ನು ಕೂಡಲೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಅವರು ಪಾವತಿಸಿದ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೂಲ ಬಿಡ್ಡುದಾರರ ಸ್ವಂತ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ನಷ್ಟವನ್ನು ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ಅಧಿನಿಯಮ 107ರ ಪ್ರಕಾರ ಕಂದಾಯ ಬಾಕಿ ಎಂದು ವಸೂಲಿ ಮಾಡಲಾಗುವುದು.
4. ಸಂಬಂಧಿಸಿದ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾಗಿ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ ಮುಖಾಂತರ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ನಡೆದ ದಿನದಿಂದ 60 ದಿನಗಳೊಳಗೆ ಯಶಸ್ವಿ ಬಿಡ್ಡುದಾರರು ಉಳಿದ ಮುಕ್ಕಾಲು ಭಾಗ ಹರಾಜಿನ ಮೊತ್ತದ ಹಣವನ್ನು "ಸ್ವೀಕೃತಿ ಆಜ್ಞೆ"ಯ ಪ್ರತಿ ತಲುಪಿದ 15 (ಹದಿನೈದು) ದಿನಗಳೊಳಗೆ ಕಟ್ಟಿ ವಾಹನವನ್ನು ಬಿಡಿಸಿಕೊಳ್ಳುವುದು. ತಪ್ಪಿದಲ್ಲಿ ಷರತ್ತು ಸಂಖ್ಯೆ: (3)ರ ಪ್ರಕಾರ ಕ್ರಮ ತೆಗೆದುಕೊಳ್ಳಲಾಗುವುದು.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರಿಗೆ ಸೇರಿರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಯು ಹರಾಜನ್ನು ತಿರಸ್ಕರಿಸಬಹುದಾಗಿದೆ.
6. ಹರಾಜನ್ನು ದಿನಾಂಕ: 24.11.2003 ರಂದು ಬೆಳಿಗ್ಗೆ 11.00 ಗಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 560 076 ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ನಡೆಸುವರು. ಅಂದು ಹರಾಜು ಆಗದಿದ್ದಲ್ಲಿ 28.11.2003 ರಂದು ಇದೇ ಹರಾಜು ಪ್ರಕಟಣೆ ಆಧಾರದ ಮೇಲೆ ಅಂತಿಮವಾಗಿ ಹರಾಜು ಮೂಲಕ ಮಾರಾಟ ಮಾಡಲಾಗುವುದು.
7. ವಾಹನದ ಮಾಲಿಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ಡುದಾರರದಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.
8. ಒಂದು ವೇಳೆ ಹರಾಜಿನಲ್ಲಿ ದೋನ್‌ವಾರು ಆದರೂ ಸಹಾ ಹರಾಜಿನ ಪೂರ್ಣ ಹಣವನ್ನು ಇತರೆ ತೆರಿಗೆಗಳೊಂದಿಗೆ ಹರಾಜು ದಿನವೇ ಪಾವತಿಸಬೇಕು.

ಪಿ.ಆರ್. 733 ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು

## ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ, ಕೋಲಾರ ವಿಭಾಗ, ಕೋಲಾರ
## ಬಾಬುವಾರು ದರದ ಟೆಂಡರ್‌ಗಳಿಗಾಗಿ ಅರ್ಜಿ ಆಹ್ವಾನ

**ಟೆಂಡರ್ ಅಧಿಸೂಚನಾ ಸಂಖ್ಯೆ:13:2003-04, ದಿನಾಂಕ: 20ನೇ ಅಕ್ಟೋಬರ್ 2003**

ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗಾಗಿ ನಿರ್ದಿಷ್ಟಪಡಿಸಿದ ನಮೂನೆಗಳಲ್ಲಿ ನೊಂದಾಯಿತ ಕರಾರುದಾರರಿಂದ ದ್ವಿಪ್ರತಿಗಳಲ್ಲಿ ಮೊಹರು ಮಾಡಲಾದ ಟೆಂಡರುಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಈ ಕೆಳಗೆ ಸಹಿ ಮಾಡಿದವರು ಕರೆದಿರುತ್ತಾರೆ. ಅವುಗಳನ್ನು ಈ ಕೆಳಗೆ ಸಹಿ ಮಾಡಿದವರು ತಮ್ಮ ಕಛೇರಿಯಲ್ಲಿ ಆ ಕಾಮಗಾರಿ:ಪ್ರತಿಯೊಂದು ಕಾಮಗಾರಿಯೆದುರು ನಮೂದಿಸಿದ ದಿನಾಂಕಗಳಂದು

ಸಂಜೆ 4-00 ಗಂಟೆವರೆಗೆ ಸ್ವೀಕರಿಸುತ್ತಾರೆ. ಆ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ದಿನಾಂಕ 24-11-2003 ರಂದು ಸಂಜೆ 4-30 ಗಂಟೆಗೆ ಸಾಧ್ಯವಾದರೆ ತೆರೆಯಲಾಗುವುದು.

ಕಾಮಗಾರಿಗೆ:ಪ್ರತಿಯೊಂದು ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ಕರಾರು ದಾಸ್ತಾವೇಜುಗಳು ಅಂದರೆ ರೇಖಾ ಚಿತ್ರಗಳು ಪೂರ್ಣ ತಂಡ ಮಾಡಬೇಕಾದ ಕಾಮಗಾರಿಗಳ ಪೂರ್ಣ ತಪಶೀಲು ಮಾಡಬೇಕಾದ ಕಾಮಗಾರಿಗಳ ವಿವಿಧ ವರ್ಗಗಳ ಪರಿಮಾಣದ ಷೆಡ್ಯೂಲ್ ಅಗತ್ಯವಿರುವಲ್ಲಿ ಕಲ್ಲುಗಣೆ ಚಾರ್ಟುಗಳು ಮತ್ತು ಯಾರ ಟೆಂಡರು ಸ್ವೀಕೃತವಾಗುತ್ತದೋ ಆ ವ್ಯಕ್ತಿಯು ಮಾಡಬೇಕಾದ ಕರಾರಿನ ಷರತ್ತುಗಳು ಇವುಗಳನ್ನು ಅದಕ್ಕಾಗಿ ಅರ್ಜಿ ಸಲ್ಲಿಸಿ ಟೆಂಡರ್ ದಾಖಲೆಗಳ ಬೆಲೆಯನ್ನು ಸಂದಾಯ ಮಾಡಿದ ತರುವಾಯ ಅವುಗಳಲ್ಲಿ ಪ್ರತಿಯೊಂದರ ಎದುರು ಹೇಳಲಾದ ದಿನಾಂಕದಂದು ಕೆಲಸದ ದಿನಗಳಂದು ಕಛೇರಿ ವೇಳೆಯ ಒಳಗಡೆ ಖರೀದಿಸಬಹುದು. ಇದಲ್ಲದೇ ಕರಾರುದಾರರು ಸಧ್ಯದಲ್ಲಿ ತಾವು ಕಾರ್ಯ ನಿರ್ವಹಿಸುತ್ತಿರುವಂತಹ ಕಾಮಗಾರಿಗಳ ಒಂದು ಪಟ್ಟಿಯನ್ನು ಈ ಕೆಳಗೆ ಸಹಿ ಮಾಡಿದವರ ಮಾಹಿತಿಗಾಗಿ ಸಲ್ಲಿಸಬೇಕೆಂದು ಕೋರಲಾಗಿದೆ.

ಟೆಂಡರು ಸಲ್ಲಿಸಬಯಸುವ ಕರಾರುದಾರರು ಟೆಂಡರ್ ಸೂಚನೆ (ಭಾಗ-1 ಪಿಡಬ್ಲ್ಯೂಜಿ 66ರಲ್ಲಿ) ಒಳಗೊಂಡ ವಿವರವಾದ ಸೂಚನೆಗಳು ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕೆಂಬುದನ್ನು ಗಮನಿಸಬೇಕು. ಇದರ ನೋಟೀಸು ಅವರು ಕೊಂಡುಕೊಳ್ಳುವ ಟೆಂಡರ್ ದಾಖಲೆಗಳ ಒಂದು ಭಾಗವಾಗಿರುತ್ತದೆ. ಸಂಚಕಾರ ಠೇವಣಿಯ ಮೊಬಲಗು ನಮೂನೆ ಹಾಗೂ ಸಿಂಧುತ್ವ ಅವಧಿಯ ಸಂಬಂಧಪಟ್ಟ ವಿವರಗಳು ಟೆಂಡರುಗಳನ್ನು ಸಲ್ಲಿಸುವಾಗ ಮತ್ತು ದಾಸ್ತಾವೇಜುಗಳನ್ನು ಭರ್ತಿ ಮಾಡುವಾಗ ಕೆಲವು ಸಂದರ್ಭಗಳಲ್ಲಿ ಮೌಲ್ಯ ನಿರ್ಧರಣಾ ಪದ್ಧತಿ, ಕರಾರುದಾರರು ಬಾಕೀದಾರರಾದಾಗ ಪರಿಣಾಮಗಳು ಯಶಸ್ವಿ ಟೆಂಡರುದಾರರಿಂದ ಸಂದಾಯ ಮಾಡಬೇಕಾದ ಭದ್ರತಾ ಠೇವಣಿ ಬೆಲೆ ಹೊಂದಾಣಿಕೆ ಇತ್ಯಾದಿಗಳು ಸಹಾ ಟೆಂಡರು ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಲಭ್ಯವಿರುತ್ತದೆ.

ಕರಾರುದಾರರಿಗೆ ಹೆಚ್ಚಿನ ವಿವರಗಳೇನಾದರೂ ಅಗತ್ಯವಿದ್ದಲ್ಲಿ ಅದನ್ನು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿಯಿಂದ ನಮೂದಿಸಿರುವ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು. ಈ ಕೆಳಗೆ ನಮೂದಿಸಲಾದ ಯಾವುದೇ ದಿನಾಂಕಗಳು ಸಾರ್ವತ್ರಿಕ ರಜಾದಿನಗಳಾಗಿದ್ದಲ್ಲಿ ಆ ದಿನಾಂಕಕ್ಕೆ ಬದಲಾಗಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದೆಂದು ಸೂಚಿಸಲಾಗಿದೆ.

**ಸೂಚನೆ:-**

1. ಇ.ಎಂ.ಡಿ.ಯನ್ನು ಕರ್ನಾಕ ಸರ್ಕಾರದ ಟ್ರಜರಿ ಚಲನ್ ಡಿಮಾಂಡ್ ಡ್ರಾಫ್ಟ್, ಎನ್.ಎಸ್.ಸಿ.ರೂಪದಲ್ಲಿ ಸೂಚಿಸಿರುವ ಹಣಕ್ಕೆ ತಕ್ಕಂತೆ ಕಾರ್ಯನಿರ್ವಾಹಕ ಇಂಜಿನಿಯರ್ ಕೋಲಾರ ವಿಭಾಗ, ಸಂಪರ್ಕ ಮತ್ತು ಕಟ್ಟಡಗಳು, ಕೋಲಾರ ರವರ ಹೆಸರಿನಲ್ಲಿ ಪಾವತಿ ಮಾಡುವುದು ಹಾಗೂ ಟೆಂಡರ್‌ನೊಂದಿಗೆ ಲಗತ್ತಿಸಬೇಕು.
2. ಯಾವುದೇ ನಿಬಂಧನೆಗಳನ್ನೊಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
3. ಠೇವಣಿ ಕ್ರಮಬದ್ಧತೆಯ (ವ್ಯಾಲಿಡಿಟಿ ಪೀರಿಯಡ್) ತೊಂಬತ್ತು ದಿವಸಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
4. ಅಂದಾಜು ಮೊತ್ತ ಹೆಚ್ಚುವರಿಯಾದಲ್ಲಿ ಇ.ಎಂ.ಡಿ.ವ್ಯತ್ಯಾಸದ ಮೊತ್ತವನ್ನು ಟೆಂಡರುದಾರರು ಕರಾರು ಮುಚ್ಚಳಿಕೆ ಸಮಯದಲ್ಲಿ ಪಾವತಿ ಮಾಡಬೇಕು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. ರೂ. | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ) | ಕರಾರು ದಾರರ ವರ್ಗ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು | ಸಂಜೆ 5-30 ರವರೆಗೆ ಅರ್ಜಿ ಸ್ವೀಕಾರದ ದಿನಾಂಕ | ಸಂಜೆ 5-30 ರವರೆಗೆ ಟೆಂಡರ್ ದಾಖಲೆಗಳನ್ನು ನೀಡುವ ದಿನಾಂಕ | ಸಂಜೆ 4-00 ಗಂಟೆವರೆಗೆ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ |
|---|---|---|---|---|---|---|---|---|---|
| 1. | ಕೋಲಾರ ಜಿಲ್ಲೆ, ಚಿಂತಾಮಣಿ ಪಟ್ಟಣದಲ್ಲಿ ಖಾಯಂ ಅಗ್ನಿಶಾಮಕ ಠಾಣೆ ನಿರ್ಮಿಸುವ ಕಾಮಗಾರಿ | 20.50 | 20500-00 | ರೂ.3000-00 + ಇತರೆ ತೆರಿಗೆಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು | 10 ತಿಂಗಳು | 19-11-2003 | 21-11-2003 | 24-11-2003 |

**ಭರ್ತಿ ಮಾಡಿದ ಟೆಂಡರ್‌ಗಳೊಂದಿಗೆ ಗುತ್ತಿಗೆದಾರರು ಸಲ್ಲಿಸಬೇಕಾಗಿರುವ ದಾಖಲೆಗಳು**

1. ಈ ಮೇಲಿನ ಕಾಮಗಾರಿಯ ಮಾದರಿಯ ಒಂದು ಕಾಮಗಾರಿಯ ಮೌಲ್ಯ ಟೆಂಡರಿಗೆ ಹಾಕಿರುವ ಮೌಲ್ಯಕ್ಕೆ ಶೇಕಡ 30 ಕಡಿಮೆ ಇರದ ಮೌಲ್ಯದ (ವಾರ್ಷಿಕ ಶೇಕಡ 10 ಹೊಂದಾಣಿಕೆಯ ತಹಲ್‌ವರೆವಿಗಿನ ಬೆಲೆ) ಒಂದು ಕಾಮಗಾರಿಯನ್ನು ಕಳೆದ 5 ವರ್ಷಗಳಲ್ಲಿ ತೃಪ್ತಿಕರವಾಗಿ ಪೂರೈಸಿರುವುದರ ಬಗ್ಗೆ ಕಾರ್ಯನಿರ್ವಾಹಕ ಇಂಜಿನಿಯರ್‌ರ ಚರ್ಚಿಗೆ ಕಡಿಮೆ ಇರದ ಅಧಿಕಾರಿಯುಕ್ತ ಪ್ರಾಧಿಕಾರದಿಂದ ಪಡೆದ ಯೋಗ್ಯತಾ ಪತ್ರವನ್ನು ಗುತ್ತಿಗೆದಾರರ ಟೆಂಡರ್ ಜೊತೆಗೆ ಹಾಜರುಪಡಿಸಬೇಕು ಹಾಗೆ ಮಾಡಲು ವಿಫಲರಾದಲ್ಲಿ ಅಂತಹ ಟೆಂಡರನ್ನು ನಿರಾಕರಿಸಲಾಗುವುದು.
2. ನಿಗದಿತ ಇ.ಎಂ.ಡಿ.ಯನ್ನು ಈ ಕೆಳಗೆ ಸೂಚಿಸಿರುವವರಿಗೆ ಡಿಮ್ಯಾಂಡ್ ಡ್ರಾಫ್ಟ್, ದ್ವಿಪ್ರತಿಯಲ್ಲಿ ಟ್ರೆಜರಿ ಚಲನನ್ನು ಅಥವಾ ಎನ್.ಎಸ್.ಸಿ. ಬ್ಯಾಂಕ್ ಗ್ಯಾರಂಟಿಗಳನ್ನು ಈ ಕೆಳಗೆ ಸಹಿ ಮಾಡಿರುವವರಿಗೆ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಟೆಂಡರ್‌ನೊಂದಿಗೆ ಸಲ್ಲಿಸುವುದು. ಹಾಗೆ ಮಾಡಲು ತಪ್ಪಿದಲ್ಲಿ ಟೆಂಡರನ್ನು ನಿರಾಕರಿಸಲಾಗುವುದು.
3. ಗುತ್ತಿಗೆದಾರರು ನೊಂದಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

4. ಗುತ್ತಿಗೆದಾರರು ನಿರ್ವಹಿಸಿ ತೃಪ್ತಿಕರವಾಗಿ ಪೂರ್ಣಗೊಳಿಸಿರುವ ಕಾಮಗಾರಿಗಳ ಯೋಗ್ಯತಾ ಪ್ರಮಾಣ ಪತ್ರವನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್‌ರವರಿಂದ ದೃಢೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

**ಟಿಪ್ಪಣಿ:-** ಈ ಮೇಲಿನ ದಾಖಲೆಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸದೇ ಸಲ್ಲಿಸುವ ಟೆಂಡರುಗಳನ್ನು ನಿರಾಕರಿಸಲಾಗುವುದು.

**ಸೂಚನೆ:-**

1. ಸದರಿ ಕಾಮಗಾರಿಗೆ ಬೇಕಾಗುವ ಸಾಮಗ್ರಿಗಳಾದ ಸಿಮೆಂಟ್ ಉಕ್ಕು ಡಾಂಬರು ಮತ್ತು ಇತರೆ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಸ್ವತಃ ಖರೀದಿಸಿ ಇಲಾಖೆ ನಿಯಮಾವಳಿಗಳ ಪ್ರಕಾರ ಗುಣನಿಯಂತ್ರಣಕ್ಕೆ ಒಳಪಡಿಸಿ, ಅದರಂತೆ ಕಾಮಗಾರಿಗೆ ಉಪಯೋಗಿಸತಕ್ಕದ್ದು. ಯಾವುದೇ ಸಾಮಗ್ರಿಗಳನ್ನು ಇಲಾಖೆಯಿಂದ ಸರಬರಾಜು ಮಾಡುವುದಿಲ್ಲ.
2. ಯಾವ ಕಾರಣವನ್ನೂ ಸಹ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
3. ಟೆಂಡರ್ ಫಾರಂಗಳನ್ನು ನೀಡುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕವನ್ನು ತಂದು ಅದರಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಟೆಂಡರ್ ಫಾರಂಗಳಿಗಾಗಿ ಹಣ ಪಾವತಿ ಮಾಡಿದ್ದರೂ ಸಹಾ ಟೆಂಡರ್ ಫಾರಂಗಳನ್ನು ನೀಡುವುದಿಲ್ಲ ಹಾಗೂ ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸುವುದಿಲ್ಲ.
4. ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕದಲ್ಲಿ ವಿಭಾಗ ಕಛೇರಿಯ ನಗದು ಗುಮಾಸ್ತರಿಂದ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕಲು ಅವಕಾಶ ನೀಡುವುದಿಲ್ಲ.

ಸದರಿ ವಿಷಯದಲ್ಲಿ ಹೆಚ್ಚಿನ ವಿವರಗಳಿಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಕೋರಿದೆ.

**ದೊಡ್ಡಗೌಡಪ್ಪ**

ಪಿ.ಆರ್. 727 ಕಾರ್ಯನಿರ್ವಾಹಕ ಇಂಜಿನಿಯರ್, ಲೋ.ಇ, ಕೋಲಾರ ವಿಭಾಗ, ಕೋಲಾರ.

## ಕೃಷಿ ಇಲಾಖೆ

## ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹೊಸದುರ್ಗ

## ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ:ಸಕೃನಿ:ಹೊದು:ಜಿಗಾ:ವಾಹನ ವಿಲೇವಾರಿ:2003-04/756-57 ದಿನಾಂಕ: 11ನೇ ನವೆಂಬರ್ 2003**

**ವಿಷಯ:** ನಿರುಪಯುಕ್ತಗೊಳಿಸಿದ ಡೀಜಲ್ ಜೀಪು ಸಂ:ಎಂವೈಯು9562ನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:15-10-03ರಂದು ನಡೆದ ಸಭೆನಡವಳಿ ಪ್ರಕಾರ.ಸಂಖ್ಯೆ:ಎಂಎಜಿ(2)ಸಿಆರ್158:03-04 ದಿನಾಂಕ:ಇಲ್ಲ ಪ್ರಕಾರ

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಸಹಾಯಕ ಕೃಷಿ ನಿರ್ದೇಶಕರು, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಕಛೇರಿಯ ನಿರುಪಯುಕ್ತವೆಂದು ದೃಢೀಕರಿಸಿದ ಡೀಜಲ್ ಜೀಪು ಸಂ: ಎಂವೈಯು9562ನ್ನು ಅದು ಇದ್ದಲ್ಲಿಯೇ ಹೇಗಿದೆಯೋ ಹಾಗೆ ಇದ್ದ ಸ್ಥಿತಿಯಲ್ಲಿ ಬಹಿರಂಗ ಹರಾಜಿನ ಮೂಲಕ ಕಛೇರಿಯ ಆವರಣದಲ್ಲಿ ಸಹಾಯಕ ಕೃಷಿ ನಿರ್ದೇಶಕರು ಇವರ ಸಮ್ಮುಖದಲ್ಲಿ ದಿನಾಂಕ:19-01-2004ನೇ ಸೋಮವಾರ ಬೆಳಿಗ್ಗೆ 11-00ಗಂಟೆಗೆ ಈ ಕೆಳಗಿನ ಷರತ್ತಿಗೊಳಪಟ್ಟು ಬಹಿರಂಗವಾಗಿ ಹರಾಜು ಮಾಡಲಾಗುವುದು.

### ಷರತ್ತುಗಳು

1. ರೂ.4000-00(ರೂ.ನಾಲ್ಕು ಸಾವಿರ ಮಾತ್ರ)ಗಳನ್ನು ಠೇವಣಿಯನ್ನು ಆ ದಿನ ಬೆಳಿಗ್ಗೆ 10-45ಗಂಟೆಯೊಳಗೆ ಸಹಾಯಕ ಕೃಷಿ ನಿರ್ದೇಶಕರು, ಹೊಸದುರ್ಗ ಇವರಲ್ಲಿ ನಗದಾಗಿ:ಡಿಡಿ ರೂಪದಲ್ಲಾಗಲೀ ಜಮಾ ಮಾಡಿ ಅಧಿಕೃತ ಪಾವತಿ ಪಡೆಯಬೇಕು.
2. ಯಶಸ್ವೀ ಬಿಡ್‌ದಾರರಿಗೆ ಈ ಹಣವನ್ನು ವಾಪಸ್ಸು ಕೊಡುವುದಿಲ್ಲ.
3. ಹರಾಜಿನ ನಡವಳಿಕೆಗಳು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರಿಂದ ಅನುಮೋದನೆಗೊಂಡು ಬಂದ ನಂತರ ಯಶ್ವಸಿ ಬಿಡ್‌ದಾರರಿಗೆ ಅಧಿಕೃತವಾಗಿ ತಿಳಿಸಲಾಗುವುದು. ತಿಳಿಸಿದ ನಂತರ 10 ದಿನಗಳೊಳಗಾಗಿ ಠೇವಣಿ ಹೊರತುಪಡಿಸಿ ಮಿಕ್ಕ ಹಣವನ್ನು ಅದಕ್ಕೆ ಕರ್ನಾಟಕ ಮಾರುಕಟ್ಟೆ ನಿಯಮ ರೀತ್ಯ ತೆರಿಗೆಯನ್ನು ಸೂಕ್ತವಾಗಿ ಭರಿಸಿದ ನಂತರ ವಾಹನವನ್ನು ಹಸ್ತಾಂತರಿಸಲಾಗುವುದು.
4. ವಾಹನವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ತಮ್ಮ ಸ್ವಂತ ಖರ್ಚಿನಿಂದ ತಮ್ಮ ಹೆಸರಿಗೆ ವರ್ಗಾಯಿಸಿಕೊಳ್ಳುವುದು.
5. ವಾಹನವನ್ನು ಹಸ್ತಾಂತರಣ ನಂತರ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ಮೂರು ದಿನಗಳೊಳಗೆ ತೆಗೆದುಕೊಂಡು ಹೋಗಬೇಕು.
6. ಹರಾಜನ್ನು ಊರ್ಜಿತ:ಅನೂರ್ಜಿತಗೊಳಿಸುವ:ಮುಂದೂಡುವ ಅಂತಿಮ ಹಕ್ಕು ಸಹಾಯಕ ಕೃಷಿ ನಿರ್ದೇಶಕರು, ಹೊಸದುರ್ಗ ಇವರಿಗೆ ಸೇರಿರುತ್ತದೆ.
7. ಸದರಿ ವಾಹನವನ್ನು ವೀಕ್ಷಿಸ ಬಯಸುವವರು ಕಛೇರಿಯ ಅಧಿಕೃತ ಕಲಾಪದ ದಿನಾಂಕಗಳಂದು ಬೆಳಿಗ್ಗೆ ಸಮಯ 11-30 ರಿಂದ 1-30ರವರೆಗೆ ವೀಕ್ಷಿಸಬಹುದು.

ಪಿ.ಆರ್. 734 ಸಹಾಯಕ ಕೃಷಿ ನಿರ್ದೇಶಕರು, ಹೊಸದುರ್ಗ.